# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1489(1780)

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ

ಉತ್ತರಿಸಬೇಕಾದ ದಿನಾಂಕ : 23.03.2020

ಉತ್ತರಿಸಬೇಕಾದ ಸಚಿವರು : ಮಾನ್ಯ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕೇರಳದ ಕಸಾಯಿಖಾನೆ, ಖಾಸಗಿ ನರ್ಸಿಂಗ್ ಹೋಮ್‌ಗಳ ಹಾಗೂ ಇತರೆ ಅಪಾಯಕಾರಿ ತ್ಯಾಜ್ಯಗಳನ್ನು ರಾಜ್ಯದ ಗುಂಡ್ಲುಪೇಟೆಯಲ್ಲಿ ತಂದು ಸುರಿಯುತ್ತಿರುವ ವರದಿ ದಿನಪತ್ರಿಕೆಯಲ್ಲಿ ವರದಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೇರಳ ರಾಜ್ಯದಿಂದ ರಾಜ್ಯದ ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಅನಧಿಕೃತವಾಗಿ ತ್ಯಾಜ್ಯ ಸಾಗಾಣಿಕೆ ಹಾಗೂ ವಿಲೇವಾರಿ ಸಂಬಂಧ ಈ ಕೆಳಕಂಡ ಪ್ರಕರಣಗಳು ವರದಿಯಾಗಿವೆ.<br>1. ದಿನಾಂಕ 05.12.2006 ರಂದು ಗುಂಡ್ಲುಪೇಟೆ ತಾಲ್ಲೂಕು ಹೆಗ್ಗವಾಡಿ ಗ್ರಾಮದ ಶ್ರೀ ಪುಟ್ಟನಂಜಪ್ಪ ರವರ ಜಮೀನಿನಲ್ಲಿ ಕೇರಳ ರಾಜ್ಯದಿಂದ ಅನಧಿಕೃತವಾಗಿ ವೈದ್ಯಕೀಯ ಹಾಗೂ ಇತರೆ ತ್ಯಾಜ್ಯ ಸಾಗಾಣಿಕೆ ಮತ್ತು ವಿಲೇವಾರಿ ಮಾಡಲಾಗಿತ್ತು. ಈ ಸಂಬಂಧ ನ್ಯಾಯಾಲಯದಲ್ಲಿ ಸಿ.ಸಿ ಸಂಖ್ಯೆ 206/2007 ದಾಖಲಿಸಲಾಗಿತ್ತು. ಸದರಿ ಪ್ರಕರಣವು ಮುಕ್ತಾಯವಾಗಿದೆ.<br>2. ದಿನಾಂಕ 24.11.2014 ರಂದು ಗುಂಡ್ಲುಪೇಟೆ ತಾಲ್ಲೂಕು ಬೇಗೂರು ಪೊಲೀಸ್ ಠಾಣೆಯಲ್ಲಿ ಕೇರಳ ರಾಜ್ಯದಿಂದ ಅನಧಿಕೃತವಾಗಿ ಘನ ತ್ಯಾಜ್ಯ ಸಾಗಾಣಿಕೆ ಸಂಬಂಧ ಎಫ್.ಐ.ಆರ್ ಹಾಗೂ ನ್ಯಾಯಾಲಯದಲ್ಲಿ ದಾವೆ ಹೂಡಲಾಗಿತ್ತು. ಸಂಖ್ಯೆ 0934 & 0973 /2014. ಸದರಿ ಪ್ರಕರಣವು ಮುಕ್ತಾಯವಾಗಿದೆ ಹಾಗೂ ಅಪರಾಧಿತರಿಗೆ ರೂ. 1900/- ದಂಡ ವಿಧಿಸಲಾಗಿದೆ.<br>3. ದಿನಾಂಕ 21.09.2015 ರಂದು ಗುಂಡ್ಲುಪೇಟೆ ಪೊಲೀಸ್ ಠಾಣೆಯಲ್ಲಿ ಕೇರಳ ರಾಜ್ಯದಿಂದ ಅನಧಿಕೃತವಾಗಿ ಪ್ಲಾಸ್ಟಿಕ್ ತ್ಯಾಜ್ಯ ಸಾಗಾಣಿಕೆ ಸಂಬಂಧ ಎಫ್.ಐ.ಆರ್ ಹಾಗೂ ನ್ಯಾಯಾಲಯದಲ್ಲಿ ದಾವೆ ಹೂಡಲಾಗಿತ್ತು. ಸಂಖ್ಯೆ 0210/2015. ಸದರಿ ಪ್ರಕರಣವು ಮುಕ್ತಾಯವಾಗಿದೆ.<br>4. ದಿನಾಂಕ 06.11.2015 ರಂದು, ಗುಂಡ್ಲುಪೇಟೆ ಪೊಲೀಸ್ ಠಾಣೆಯಲ್ಲಿ ಕೇರಳ ರಾಜ್ಯದಿಂದ ಅನಧಿಕೃತವಾಗಿ ಪ್ಲಾಸ್ಟಿಕ್ ಮತ್ತು ಇತರೆ ತ್ಯಾಜ್ಯ ಸಾಗಾಣಿಕೆ ಸಂಬಂಧ ಎಫ್.ಐ.ಆರ್ ಹಾಗೂ ನ್ಯಾಯಾಲಯದಲ್ಲಿ ದಾವೆ ಹೂಡಲಾಗಿದೆ. ಸಂಖ್ಯೆ 0246/2018. ಸದರಿ ಪ್ರಕರಣವು ನ್ಯಾಯಾಲಯದಲ್ಲಿ ಬಾಕಿ ಇರುತ್ತದೆ. |

| | | |
|---|---|---|
| | | 5. ದಿನಾಂಕ 26.08.2018 ರಂದು ಗುಂಡ್ಲುಪೇಟೆ ಪೊಲೀಸ್ ಠಾಣೆಯಲ್ಲಿ ಕೇರಳ ರಾಜ್ಯದಿಂದ ಅನಧಿಕೃತವಾಗಿ ಪ್ರಾಣಿಗಳ ಮೂಳೆ, ಚರ್ಮ ಇತ್ಯಾದಿ ತ್ಯಾಜ್ಯ ಸಾಗಾಣಿಕೆ ಮತ್ತು ವಿಲೇವಾರಿ ಮಾಡುವ ಪ್ರಯತ್ನ ಸಂಬಂಧ ಎಫ್.ಐ.ಆರ್ ಹಾಗೂ ನ್ಯಾಯಾಲಯದಲ್ಲಿ ದಾವೆ ಹೂಡಲಾಗಿದೆ. ಸಂಖ್ಯೆ 0376/2018 /2014. ಸದರಿ ಪ್ರಕರಣವು ನ್ಯಾಯಾಲಯದಲ್ಲಿ ಬಾಕಿ ಇರುತ್ತದೆ.<br><br>ಇದಲ್ಲದೇ ಗುಂಡ್ಲುಪೇಟೆಯ ಸರಹದ್ದಿನ ಮೂಲೆಹೊಳೆ ಬಳಿ ಚೆಕ್‌ಪೋಸ್ಟ್ ಇದ್ದು, ಸದರಿ ಚೆಕ್‌ಪೋಸ್ಟ್‌ನಲ್ಲಿ ತಪಾಸಣೆ ನಡೆಸಿ ಘನ ತ್ಯಾಜ್ಯ ತುಂಬಿಕೊಂಡು ಬಂದಿರುವ ಲಾರಿಗಳನ್ನು ವಶಕ್ಕೆ ಪಡೆದು ಗುಂಡ್ಲುಪೇಟೆ ಪೊಲೀಸ್ ಠಾಣೆಯಲ್ಲಿ ಒಟ್ಟು 20 ಪ್ರಕರಣಗಳನ್ನು ದಾಖಲಿಸಲಾಗಿದೆ. |
| (ಆ) | ಗುಂಡ್ಲುಪೇಟೆಯ ಖಾಸಗಿ ಜಮೀನಿನ ಮಾಲೀಕರು ಹಣದ ಆಮಿಷದಿಂದ ತ್ಯಾಜ್ಯ ಸುರಿತಕ್ಕೆ ಅವಕಾಶ ಮಾಡಿಕೊಟ್ಟಿದ್ದು, ಲೋಡುಗಟ್ಟಲೆ ಬರುವ ತ್ಯಾಜ್ಯಗಳಿಂದ ಪರಿಸರ ಹಾಗೂ ಅಂತರ್ಜಲ ಕೂಡಾ ಕಲುಷಿತವಾಗುವ ಬಗ್ಗೆ ಸ್ಥಳೀಯರಿಂದ ದೂರು ದಾಖಲಾಗಿದೆಯೇ; | ಗುಂಡ್ಲುಪೇಟೆಯ ಖಾಸಗಿ ಜಮೀನಿನ ಮಾಲೀಕರು ಹಣದ ಆಮೀಷಕ್ಕೆ ಒಳಗಾಗಿ ತ್ಯಾಜ್ಯ ಸುರಿತಕ್ಕೆ ಅವಕಾಶ ಮಾಡಿಕೊಟ್ಟ ಬಗ್ಗೆ ಯಾವುದೇ ದೂರು ಸ್ಥಳೀಯರಿಂದ ದಾಖಲಾಗಿರುವುದಿಲ್ಲ. |
| (ಇ) | ದಾಖಲಾಗಿದ್ದಲ್ಲಿ, ಸ್ಥಳೀಯ ಆಡಳಿತದಿಂದ ಈ ಬಗ್ಗೆ ಯಾವ ಕ್ರಮ ಕೈಗೊಳ್ಳಲಾಗಿದೆ; | ಅನ್ವಯಿಸುವುದಿಲ್ಲ |
| (ಈ) | ಬಂಡೀಪುರ ಅರಣ್ಯ ಇಲಾಖೆ ವ್ಯಾಪ್ತಿಯಲ್ಲಿ ಅರಣ್ಯ ಇಲಾಖೆ ಹಾಗೂ ಪೊಲೀಸ್ ಚೆಕ್ ಪೋಸ್ಟ್‌ಗಳಿದ್ದರೂ ತ್ಯಾಜ್ಯ ರವಾನೆಯಾಗುವ ಕುರಿತು ಸರ್ಕಾರ ತನಿಖೆ ಕೈಗೊಳ್ಳುವುದೇ; | ಬಂಡೀಪುರ ಅರಣ್ಯ ವ್ಯಾಪ್ತಿಯ ಮೂಲೆಹೊಳೆ ಎಂಬಲ್ಲಿ ಅರಣ್ಯ ಇಲಾಖೆ, ಪಶುವೈದ್ಯ ಇಲಾಖೆ ಹಾಗೂ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಸಿಬ್ಬಂದಿಗಳು, ಪೊಲೀಸ್ ಇಲಾಖಾ ಸಿಬ್ಬಂದಿಗಳ ಸಹಯೋಗದಲ್ಲಿ ಚೆಕ್‌ಪೋಸ್ಟ್ ತೆರೆದು ನಿರಂತರವಾಗಿ ಪರಿಶೀಲಿಸಿ ಈಗಾಗಲೇ 20ಕ್ಕೂ ಹೆಚ್ಚು ಪ್ರಕರಣಗಳನ್ನು ದಾಖಲಿಸಿ ಆರೋಪಿತರ ವಿರುದ್ಧ ಘನ ನ್ಯಾಯಾಲಯಕ್ಕೆ ದೋಷರೋಪಣಾ ಪತ್ರ ಸಲ್ಲಿಸಲಾಗಿರುತ್ತದೆ.<br><br>ಅಂತರರಾಜ್ಯ ತನಿಖಾ ಠಾಣೆಗಳ ಮೂಲಕ ಯಾವುದೇ ರೀತಿಯಾದ ಘನ ತ್ಯಾಜ್ಯಗಳು ಮತ್ತು ಪ್ಲಾಸ್ಟಿಕ್ ಉತ್ಪನ್ನ ಸಾಗಾಣಿಕೆಗೆ ಸಂಬಂಧಿಸಿದಂತೆ, ಅಧಿಕೃತವಾಗಿ ರಹದಾರಿ ಹೊಂದದೇ ಇದ್ದ ಪಕ್ಷದಲ್ಲಿ ಅಂತಹ ವಾಹನಗಳನ್ನು ಯಾವುದೇ ಕಾರಣಕ್ಕೂ ರಾಜ್ಯ ಪ್ರವೇಶ ಮಾಡಲು ಅವಕಾಶ ನೀಡದಿರಲು ಅರಣ್ಯ ಇಲಾಖೆಯ ತನಿಖಾ ಠಾಣೆಯ ಸಿಬ್ಬಂದಿಗಳಿಗೆ ಅಗತ್ಯ ನಿರ್ದೇಶನ ನೀಡಲಾಗಿರುತ್ತದೆ. |

| | | |
|---|---|---|
| (ಉ) | ಗುಂಡ್ಲುಪೇಟೆ ತಾಲ್ಲೂಕಿನಾದ್ಯಂತ ಹಲವಾರು ಭಾಗಗಳಲ್ಲಿ ಈ ರೀತಿ ತ್ಯಾಜ್ಯ ಸುರಿಯಲಾಗುತ್ತಿದ್ದು, ಇದರಿಂದಾಗುವ ದುಷ್ಪರಿಣಾಮವನ್ನು ತಪ್ಪಿಸುವ ನಿಟ್ಟಿನಲ್ಲಿ ಸರ್ಕಾರ ಕೈಗೊಳ್ಳುವ ಕ್ರಮಗಳೇನು? | ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಅನಧಿಕೃತವಾಗಿ ಸಾಗಾಣಿಕೆ ಮತ್ತು ವಿಲೇವಾರಿ ಮಾಡಿದ ಸಂದರ್ಭದಲ್ಲಿ ಎಫ್.ಐ.ಆರ್ ಹಾಗೂ ನ್ಯಾಯಾಲಯದಲ್ಲಿ ಪ್ರಕರಣಗಳನ್ನು ದಾಖಲು ಮಾಡಲಾಗುತ್ತಿದೆ. ಚಾಮರಾಜನಗರ ಜಿಲ್ಲಾಧಿಕಾರಿಗಳು, ಕೇರಳ ರಾಜ್ಯದ ನೆರೆಯ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಈ ಸಂಬಂಧ ದಿನಾಂಕ: 15.12.2014 ರಂದು ಪತ್ರ ಬರೆದಿರುತ್ತಾರೆ. ಜಿಲ್ಲೆಯ ಅರಣ್ಯ ಚೆಕ್ ಪೋಸ್ಟ್‌ಗಳನ್ನು ಭದ್ರಪಡಿಸಲು ಜಿಲ್ಲಾಧಿಕಾರಿಗಳು ದಿನಾಂಕ: 18.06.2018 ರಂದು ಆದೇಶ ಹೊರಡಿಸಿರುತ್ತಾರೆ. ಕೇರಳ ರಾಜ್ಯದಿಂದ ತ್ಯಾಜ್ಯವು ಜಿಲ್ಲೆಗೆ ಪ್ರವೇಶಿದಂತೆ ಚೆಕ್ ಪೋಸ್ಟ್‌ನಲ್ಲೇ ತಡೆಯಲು ಸೂಕ್ತ ಕ್ರಮ ಕೈಗೊಳ್ಳಲಾಗಿದೆ ಹಾಗೂ ಕೆಲವು ಪ್ರಕರಣಗಳಲ್ಲಿ ತ್ಯಾಜ್ಯವನ್ನು ಚೆಕ್ ಪೋಸ್ಟ್‌ನಲ್ಲಿ ತಡೆದು ಕೇರಳ ರಾಜ್ಯಕ್ಕೆ ವಾಪಸ್ಸು ಕಳುಹಿಸಲಾಗಿದೆ. |

**ಸಂಖ್ಯೆ: ಅಪಜೀ 80 ಇಪಿಸಿ 2020**

21/03/2020

**(ಆನಂದ್ ಸಿಂಗ್)**
**ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.**